ಡಾ ॥ ಚನ್ನಬಸಪ್ಪ ಎಸ್. ಪಾಟೀಲ *

# ಟೀಪು ಸುಲ್ತಾನನ ಖಡ್ಗಗಳು

ಟೀಪು ಸುಲ್ತಾನನ ರಾಜಧಾನಿಯಾಗಿದ್ದ ಶ್ರೀರಂಗ ಪಟ್ಟಣದಲ್ಲಿ ಟೀಪುಸುಲ್ತಾನ ಮತ್ತು ಬ್ರಿಟಿಷರ ನಡುವೆ ನಡೆದ ಯುದ್ಧದಲ್ಲಿ ೪ನೇ ಮೇ ೧೭೯೯ ರಂದು ಟೀಪುಸುಲ್ತಾನ ಒಬ್ಬ ಸಾಮಾನ್ಯ ಸಿಪಾಯಿಯಂತೆ ಹೋರಾಡುತ್ತ ವೀರ ಮರಣವನ್ನು ಹೊಂದಿದನು. ಶ್ರೀರಂಗಪಟ್ಟಣದ ಪತನವಾದ ಮೇಲೆ ಬ್ರಿಟಿಷರು ವಶಪಡಿಸಿಕೊಂಡ ವಸ್ತುಗಳಲ್ಲಿ ಮೂರು ಖಡ್ಗಗಳು ಪ್ರಮುಖವಾಗಿವೆ. ವಶಪಡಿಸಿಕೊಂಡ ವಸ್ತುಗಳನ್ನು ಹಂಚಲು ಜನರಲ್ ಫ್ಲಾಯ್ಡ್ ನೇತೃತ್ವದಲ್ಲಿ ಪಾರಿತೋಷಕ ಸಮಿತಿಯನ್ನು ರಚಿಸಲಾಯಿತು.[1]

ಟೀಪುಸುಲ್ತಾನನ ಮಲಗುವ ಕೊಠಡಿಯಿಂದ ವಶಪಡಿಸಿಕೊಂಡ ಪಟ್ಟದ ಕತ್ತಿಯನ್ನು ಜನರಲ್ ಡೇವಿಡ್ ಬೇರ್ಡ್‌ಗೆ ಕೊಡಲಾಯಿತು. ಒಂದು ವಜ್ರದ ನಕ್ಷತ್ರ ಮತ್ತು ಟೀಪುವಿನ ಒಂದು ಖಡ್ಗವನ್ನು ಬ್ರಿಟಿಷ್ ಸೈನ್ಯವು ಲಾರ್ಡ್ ವೆಲ್ಲಸ್ಲಿಗೆ ಕೊಟ್ಟಿತು.[2] ಹಿರಿಯರಾದ ಲಾರ್ಡ್ ಕಾರ್ನ್‌ವಾಲಿಸ್ ಟೀಪುವಿನ ಒಂದು ಖಡ್ಗ, ಮುರಾರಿರಾವ್‌ನ ಒಂದು ಖಡ್ಗ ಮತ್ತು ಟೀಪು ಯುದ್ಧದಲ್ಲಿ ಧರಿಸುತ್ತಿದ್ದ ಶಿರಸ್ತ್ರಾಣವನ್ನು ಪಡೆದನು.[3]

**1 ಲಾರ್ಡ್ ವೆಲ್ಲಸ್ಲಿಗೆ ಕೊಟ್ಟ ಖಡ್ಗ :** ಕರ್ನಲ್ ಆರ್ಥರ್ ವೆಲ್ಲಸ್ಲಿಯು ಗವರ್ನರ್ ಜನರಲ್ ಆಗಿದ್ದ ರಿಚರ್ಡ್ ವೆಲ್ಲಸ್ಲಿಯ ಸಹೋದರ. ಈತನೇ ಡ್ಯೂಕ್ ಆಫ್ ವೆಲ್ಲಿಂಗ್‌ಟನ್. ಟೀಪುವಿನ ವಿರುದ್ಧವಾದ ಸೈನ್ಯ ಕಾರ್ಯಾಚರಣೆಯಲ್ಲಿ ಈತನು ಹೈದರಾಬಾದ್ ಕಡೆಯಿಂದ ಬಂದ ೧೦,೦೦೦ ಕಾಲಾಳು ಮತ್ತು ೬,೦೦೦ ಕುದುರೆ ಸವಾರರು ಇದ್ದ ಸೈನ್ಯದ ನೇತೃತ್ವವನ್ನು ವಹಿಸಿದ್ದನು.[4]

ವೆಲ್ಲಸ್ಲಿಗೆ ಕೊಟ್ಟಿದ್ದ ಖಡ್ಗವನ್ನು ಡಿಸೆಂಬರ್ ೧೯೮೫ರಲ್ಲಿ ಮೈಸೂರಿನಲ್ಲಿ ಕಾನೂನು ಬಾಹಿರವಾಗಿ ಮಾರಾಟ ಮಾಡಲು ಹವಣಿಸುತ್ತಿರುವಾಗ ಕೇಂದ್ರ ಅಪರಾಧ ತನಿಖಾ ದಳದವರು (ಸಿಬಿಐ) ವಶಪಡಿಸಿಕೊಂಡರು. ಇದು ಈಗ ಈ ದಳದ ವಶದಲ್ಲಿ ಬೆಂಗಳೂರಿನಲ್ಲಿದೆ. ಈ ಖಡ್ಗದ ದೊಡ್ಡ ವರ್ಣಛಾಯಾ ಚಿತ್ರಗಳನ್ನು ಮೈಸೂರ ಅರಮನೆಯಲ್ಲಿ ಪ್ರದರ್ಶಿಸಲಾಗಿದೆ. ಖಡ್ಗದ ಮರದ ಪೆಟ್ಟಿಗೆಯ ಮೇಲೆ ಮೂರು ಗುರುತಿನ ಚೀಟಿಗಳನ್ನು ಅಂಟಿಸಲಾಗಿದೆ. ಈ ಚೀಟಿಗಳು ಖಡ್ಗದ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ.

**ಗುರುತಿನ ಚೀಟಿ ೧ : ಬೆರಳಚ್ಚು ಮಾಡಿದ ಈ ಚೀಟಿಯ ಪಾಠ ಹೀಗಿದೆ :**

"In 1798 the Marquis Wellesly became Governor of India, and in the war that year with the famous Tippoo Sahib, his brother Colonel Sir Arthur Wellesly, (the future hero of the Peninsular Campaign), came to the front in India. After a month's siege, the war ended with the

* ಉಪನಿರ್ದೇಶಕರು, ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು

1 ಪ್ರಾಕ್ಸಿ ಫರ್ನಾಂಡಿಸ್, ೧೯೬೯, ಸ್ಟಾರ್ಮ್ ಓವರ್ ಸೆರಿಂಗಪಟಮ್, ದಿ ಇನ್‌ಕ್ರೆಡಿಬಲ್ ಸ್ಟೋರಿ ಆಫ್ ಹೈದರ್ ಅಲಿ ಅಂಡ್ ಟಿಪ್ಪುಸುಲ್ತಾನ, ಥ್ಯಾಕರ್ಸ್, ಬಾಂಬೆ, ಪು. ೧೯೯

2 ಅದೇ, ಪು. ೨೦೧

3 ಅದೇ, ಪು. ೨೦೧

4 ಅದೇ, ಪು. ೧೮೨



ಟೀಪು ಸುಲ್ತಾನನ ಖಡ್ಗ, ಲಾರ್ಡ್ ವೆಲ್ಲಸ್ಲಿಗೆ ಕೊಟ್ಟ ಈ ಖಡ್ಗ ಈಗ ಬೆಂಗಳೂರಿನಲ್ಲಿ ಪೋಲೀಸರ ವಶದಲ್ಲಿದೆ.

capture of Seringapatam in May 1799. As Tippoo and his suite, were endeavouring to escape through a small gate into the town, a light company of the 12th Foot East Suffolk Regt.under Captain Woodhall fired upon them with such effect, that the gateway was choked with killed and wounded, Captain Woodhall was cut across the thigh by the Sultan's sword, and Tippo Sahib fell fiercely fighting after the city was entered".

**ಗುರುತಿನ ಚೀಟಿ ೨ : ಕೈಬರಹದ ಈ ಚೀಟಿಯ ಪಾಠ** ಹೀಗಿದೆ :

"From Gordon Castle, A Sword of Tippo Saib given by Sir Arthur Wellesly KCB to Charles 4th Duke of Richmond."

**ಗುರುತಿನ ಚೀಟಿ ೩ : ಬೆರಳಚ್ಚು ಮಾಡಿದ ಈ ಚೀಟಿಯ** ಪಾಠ ಹೀಗಿದೆ :

"ORIENT SWORD with curved inscribed blade and grip in beautifully engraved damscened scabbard. Belonged to [Tippoo] Sahib, Sultan of Mysore and given by Sir Arthur Wellesly K.C.B. to Charles 4th Duke of Richmond. Sword was purchased from Gordon Castle, Focr....er...ayshire from His grace the Duke of Richmond and....August 1938".

ವಕ್ರಾಕಾರದ ಅಲಗಿನ ಮೇಲೆ ಪರ್ಷಿಯನ್ ಲಿಪಿಯ ಶಾಸನವಿದೆ. ಹಿತ್ತಾಳೆಯ ಹಿಡಿಯ ಮೇಲೆ ರೇಖಾ ಚಿತ್ರಗಳಿವೆ. ಖಡ್ಗದ ಒರೆಯು ಲೋಹದ್ದಾಗಿದೆ. ಒರೆಯ ಹೊರಮೈಗೆ ಚಿನ್ನದ ತಗಡನ್ನು ಹೊದಿಸಲಾಗಿದೆ. ಒರೆಯ ತುದಿಯ ಭಾಗವನ್ನು ಹೂವಿನ ಚಿತ್ರಗಳಿಂದ ಅಲಂಕರಿಸಿದೆ.

**೨. ಜನರಲ್ ಡೇವಿಡ್ ಬೇರ್ಡ್‌ಗೆ ಕೊಟ್ಟ ಖಡ್ಗ :** ೪ನೇ



ಟೀಪ್ರು ಸುಲ್ತಾನನ ಖಡ್ಗ, ಸ್ಕಾಟಿಷ್ ಯುನೈಟೆಡ್ ಸರ್ವಿಸ್ ಮ್ಯೂಸಿಯಂ ಎಡಿನ್‌ಬರಾ



ಟೀಪು ಸುಲ್ತಾನನ ಖಡ್ಗ, ವಿಕ್ಟೋರಿಯಾ ಅಂಡ್ ಅಲ್ಬರ್ಟ್ ಮ್ಯೂಸಿಯಂ ಲಂಡನ್

ಮೇ ೧೭೯೯ ರಂದು ಶ್ರೀರಂಗಪಟ್ಟಣದ ಕೋಟೆಯನ್ನು ಭೇದಿಸಲು ನೇಮಿಸಿದ ೨೪೯೪ ಆಂಗ್ಲರ ಮತ್ತು ೧೮೮೨ ಸಿಪಾಯಿಗಳ ನೇತೃತ್ವವನ್ನು ಲೆಫ್ಟಿನೆಂಟ್ ಜನರಲ್ ಡೇವಿಡ್ ಬೇರ್ಡ್‌ಗೆ ವಹಿಸಲಾಗಿತ್ತು. ಇದಕ್ಕೆ ಕಾರಣ ಕೋಟೆಯ ವಿವರಗಳನ್ನು ಬೇರ್ಡ್ ಚೆನ್ನಾಗಿ ಅರಿತಿದ್ದನು. ಅಂದಿಗೆ ಮೂವತ್ತು ವರ್ಷಗಳ ಹಿಂದೆ ಆತ ಯುವ ಲೆಫ್ಟಿನಂಟ್ ಆಗಿ ಕರ್ನಲ್ ಬೇಲಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹೈದರ್ ಆಲಿ ಮತ್ತು ಟೀಪುಸುಲ್ತಾನರ ಕೈಯಲ್ಲಿ ಸೆರೆಯಾಳಾಗಿ ಎರಡು ವರ್ಷಗಳ ಕಾಲ ಶ್ರೀರಂಗಪಟ್ಟಣದ ಡಂಜನ್‌ನಲ್ಲಿ (ಸೆರೆಮನೆಯಲ್ಲಿ) ಬೇಲಿಯೊಂದಿಗೆ ಇದ್ದನು.[5] ತನಗೆ ಮತ್ತು ತನ್ನ ಮೇಲಾಧಿಕಾರಿಗೆ ಆದ ಅವಮಾನದ ಸೇಡು ತೀರಿಸಿಕೊಳ್ಳಲು ಈಗ ಆತನಿಗೆ ಅವಕಾಶ ಒದಗಿತ್ತು. ಶ್ರೀರಂಗಪಟ್ಟಣದ ಕೋಟೆಯನ್ನು ಭೇದಿಸುವಲ್ಲಿ ಯಶಸ್ವಿಯಾದ ಬೇರ್ಡ್‌ಗೆ ಟೀಪುಸುಲ್ತಾನನ ಪಟ್ಟದ ಕತ್ತಿಯನ್ನು ಕೊಡಲಾಯಿತು.

ಈ ಖಡ್ಗವು ಈಗ ಸ್ಕಾಟ್‌ಲ್ಯಾಂಡಿನ ರಾಜಧಾನಿಯಾದ ಎಡಿನ್‌ಬರೋದ ಕ್ಯಾಸಲ್‌ನಲ್ಲಿರುವ ಸ್ಕಾಟಿಷ್ ಯುನೈಟೆಡ್ ಸರ್ವಿಸ್ ಮ್ಯೂಜಿಯಮ್‌ನಲ್ಲಿದೆ. ಖಡ್ಗದ ಅಲಗಿನ ಮೇಲೆ ಕೆತ್ತಿರುವ ಶಾಸನದ ಪಾಠ ಹೀಗಿದೆ : "The sword of Tippo Sultan found in his bed chamber after Seringpatam was taken by storm 4th May 1799 and presented by the army to Major General Baird through their commander Lieut. General Harris, as a token of their high opinion of his courage and conduct in the assault which he commanded, and in which Tippo Sultaun was slain".

ಈ ಖಡ್ಗದ ಅಲಗು ಅಗಲವಾಗಿ ನೇರವಾಗಿದೆ. ಹಿತ್ತಾಳೆಯ ಹಿಡಿಯ ಮೇಲೆ ಪರ್ಶಿಯನ್ ಅಕ್ಷರಗಳಿವೆ. ಹಿಡಿಯ ತುದಿಗೆ ಒಂದು ಚಿಕ್ಕ ಉಂಗುರವಿದೆ. ಖಡ್ಗದ ಒರೆಗೆ ವೆಲ್ವೆಟ್ ಬಟ್ಟೆಯನ್ನು ಹೊದಿಸಲಾಗಿದೆ. ಒರೆಯ ತುದಿಭಾಗಗಳನ್ನು ಚಿನ್ನ ಲೇಪಿತ ಲೋಹದಿಂದ ಅಲಂಕರಿಸಲಾಗಿದೆ. ಮೇಲಿನ ತುದಿಯ ಹತ್ತಿರ ನೇತುಹಾಕಿಕೊಳ್ಳಲು ಎರಡು ಉಂಗುರಗಳಿವೆ.

**3. ಲಾರ್ಡ್ ಕಾರ್ನ್‌ವಾಲಿಸ್‌ಗೆ ಕೊಟ್ಟ ಖಡ್ಗ :** ಲಾರ್ಡ್ ಕಾರ್ನ್‌ವಾಲಿಸ್‌ನು ರಿಚರ್ಡ್ ವೆಲ್ಲೆಸ್ಲಿಗಿಂತ ಹಿಂದೆ ಗವರ್ನರ್ ಜನರಲ್ ಆಗಿದ್ದನು. ಟೀಪುವಿನ ಬಲವನ್ನು ಕುಗ್ಗಿಸುವಲ್ಲಿ ಕಾರ್ನ್‌ವಾಲಿಸ್ ಯಶಸ್ವಿಯಾಗಿದ್ದನು.

ಲಂಡನ್ನಿನ ವಿಕ್ಟೋರಿಯಾ ಆಂಡ್ ಆಲ್ಬರ್ಟ್ ಸಂಗ್ರಹಾಲಯದಲ್ಲಿ ಟೀಪುವಿಗೆ ಸಂಬಂಧಿಸಿದ ಅನೇಕ ವಸ್ತುಗಳೊಂದಿಗೆ ಒಂದು ಖಡ್ಗವಿದೆ. ಈ ಖಡ್ಗವೇ ಕಾರ್ನ್‌ವಾಲಿಸ್‌ಗೆ ಕೊಟ್ಟ ಖಡ್ಗವಾಗಿರಬಹುದು. ವಕ್ರಾಕಾರದ ಅಲಗುಳ್ಳ ಈ ಖಡ್ಗದ ಹಿಡಿಯ ಮೇಲೆ ಚಿನ್ನದ ಲೇಪವಿದೆ. ಖಡ್ಗದ ಮೇಲೆ ಟೀಪುವಿನ ವೈಯುಕ್ತಿಕ ಖಡ್ಗವೆಂದು ಪರ್ಶಿಯನ್ ಭಾಷೆಯಲ್ಲಿ ಬರೆಯಲಾಗಿದೆ.

೦

---

5 ಅದೇ, ಪು. ೧೮೬